## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 527 (699) |
| ಸದಸ್ಯರ ಹೆಸರು | | ಶ್ರೀ ಎಸ್.ಎಲ್.ಭೋಜೇಗೌಡ (ಶಿಕ್ಷಕರ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | | 14.12.2020 |
| ಉತ್ತರಿಸಬೇಕಾದ ಸಚಿವರು | | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಪ್ರಶ್ನೆ | | ಉತ್ತರ |
| (ಅ) | ಅತಿಥಿ ಉಪನ್ಯಾಸಕರ ಸೇವಾ ಭದ್ರತೆಗೆ ಸಂಬಂಧಿಸಿದಂತೆ ನಿವೃತ್ತ ನ್ಯಾಯಾಧೀಶರ ನೇತೃತ್ವದಲ್ಲಿ 7 ಜನ ತಜ್ಞರ ಸಮಿತಿಯನ್ನು ರಚಿಸಿರುವ ವಿಚಾರ ಸರ್ಕಾರದ ಯಾವ ಹಂತದಲ್ಲಿದೆ; | ಇಂತಹ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| (ಆ) | ಅತಿಥಿ ಉಪನ್ಯಾಸಕರಿಗೆ ಸೇವಾ ಭದ್ರತೆ ನೀಡುವ ಬಗ್ಗೆ ಸರ್ಕಾರದ ನಿಲುವೇನು; | ಸರ್ಕಾರಿ ಪದವಿ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಪ್ರವೇಶಾತಿ ಸಂಖ್ಯೆಗೆ ಅನುಗುಣವಾಗಿ ಉಂಟಾಗುವ ಕಾರ್ಯಭಾರವನ್ನು ಮೊದಲು ಆಯಾ ಕಾಲೇಜಿನ ಖಾಯಂ ಅಧ್ಯಾಪಕರುಗಳಿಗೆ ಹಂಚಿಕೆ ಮಾಡಿ, ತದನಂತರ ಉಳಿಕೆಯಾಗುವ ಹೆಚ್ಚುವರಿ ಕಾರ್ಯಭಾರಕ್ಕೆ ಆಯಾ ಶೈಕ್ಷಣಿಕ ವರ್ಷಕ್ಕೆ ಸೀಮಿತಗೊಳಿಸಿ ತಾತ್ಕಾಲಿಕವಾಗಿ ಕಲಾ ಮತ್ತು ವಾಣಿಜ್ಯ ವಿಷಯಕ್ಕೆ ವಾರಕ್ಕೆ ಗರಿಷ್ಠ 8 ಗಂಟೆ ಹಾಗೂ ವಿಜ್ಞಾನ ವಿಷಯಕ್ಕೆ 10 ಗಂಟೆಗಳ ಕಾರ್ಯಭಾರಕ್ಕೆ ಮಾತ್ರ ಅತಿಥಿ ಉಪನ್ಯಾಸಕರ ಸೇವೆಯನ್ನು ಬಳಸಿಕೊಳ್ಳಲಾಗುತ್ತಿದೆ. ಅಲ್ಲದೆ, ಅತಿಥಿ ಉಪನ್ಯಾಸಕರನ್ನು ಹೆಚ್ಚುವರಿ ಕಾರ್ಯಭಾರಕ್ಕೆ ಅನುಗುಣವಾಗಿ ಮಾತ್ರ ಆಯ್ಕೆ ಮಾಡಿಕೊಳ್ಳಲಾಗುತ್ತಿದ್ದು, ಯಾವುದೇ ಖಾಲಿ ಹುದ್ದೆಗಳಿಗೆ ನೇಮಕಾತಿ ಮಾಡಿಕೊಳ್ಳಲಾಗುತ್ತಿಲ್ಲ. ಆದ್ದರಿಂದ ಅವರುಗಳ ತಾತ್ಕಾಲಿಕ ಸೇವೆಯನ್ನು ಪರಿಗಣಿಸಿ ಖಾಯಂ ಮಾಡಲು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶವಿರುವುದಿಲ್ಲ.<br>ಅಲ್ಲದೇ, ಕರ್ನಾಟಕ ಆಡಳಿತ ನ್ಯಾಯಮಂಡಳಿಯು (ಮಾನ್ಯ ಸರ್ವೋಚ್ಚ ನ್ಯಾಯಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ನೀಡಿರುವ ತೀರ್ಪನ್ನು ಆಧರಿಸಿ) ಸೇವಾ ಸಕ್ರಮಾತಿ ಕೋರಿ ಅತಿಥಿ ಉಪನ್ಯಾಸಕರುಗಳು ಸಲ್ಲಿಸಿದ ಅರ್ಜಿಗಳನ್ನು ವಜಾಗೊಳಿಸಿರುವ ಹಿನ್ನಲೆಯಲ್ಲಿ ನಿಯಮಾನುಸಾರ ನೇಮಕವಾಗದಿರುವ ಅತಿಥಿ ಉಪನ್ಯಾಸಕರ ನೇಮಕಾತಿಗಳನ್ನು ಸಕ್ರಮಾತಿಗೊಳಿಸಲು ಅವಕಾಶವಿರುವುದಿಲ್ಲ. |
| ಇ) | ಯಾವ ಕಾಲಮಿತಿಯೊಳಗೆ ಕ್ರಮ ತೆಗೆದುಕೊಳ್ಳಲಾಗುವುದು | ಉದ್ಭವಿಸುವುದಿಲ್ಲ. |

ಇಡಿ 233 ಡಿಪಿಇ 2020

(ಡಾ. ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)